# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 593 (758)

ಸದಸ್ಯರ ಹೆಸರು : ಶ್ರೀ ಕವಟಗಿಮಠ ಮಹಾಂತೇಶ ಮಲ್ಲಿಕಾರ್ಜುನ

ಉತ್ತರಿಸಬೇಕಾದ ಸಚಿವರು : ಮಾನ್ಯ ಉಪ ಮುಖ್ಯಮಂತ್ರಿ, ಸಾರಿಗೆ ಸಚಿವರು

ಉತ್ತರಿಸಬೇಕಾಗಿದ್ದ ದಿನಾಂಕ : 25-07-2019

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| (ಅ) | ರಾಜ್ಯದಲ್ಲಿ ಪ್ರಾದೇಶಿಕ ಸಾರಿಗೆ ಕಛೇರಿ (RTO) ಯಿಂದ ವಾಹನಗಳಿಗೆ ಪರವಾನಿಗೆ ಪಡೆದು, ಒಂದೇ ಅನುಮತಿ (permit) ಪತ್ರದ ಆಧಾರದ ಮೇಲೆ ಹಲವಾರು ವಾಹನಗಳನ್ನು ಓಡಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಪ್ರಾದೇಶಿಕ ಸಾರಿಗೆ ಕಛೇರಿಗಳಲ್ಲಿ ರಹದಾರಿ ಪಡೆದು ಅದರ ಆಧಾರದ ಮೇಲೆ ಹಲವಾರು ವಾಹನಗಳನ್ನು ಓಡಿಸುತ್ತಿರುವುದು ಕಂಡುಬಂದಿರುವುದಿಲ್ಲ. |
| (ಆ) | ಈ ರೀತಿಯ ನಿಯಮ ಉಲ್ಲಂಘನೆಯಾದ ಪ್ರಕರಣಗಳೆಷ್ಟು; (ಕಳೆದ 3 ವರ್ಷಗಳ ಮಾಹಿತಿ ಒದಗಿಸುವುದು); | ಕಳೆದ 3 ವರ್ಷಗಳಲ್ಲಿ ಒಂದೇ ರಹದಾರಿ ಪಡೆದು ಇದರ ಆಧಾರದ ಮೇಲೆ ವಾಹನ ಓಡಿಸುತ್ತಿರುವ ಪ್ರಕರಣಗಳು ಇರುವುದಿಲ್ಲ. |
| (ಇ) | ಕಾನೂನು ಉಲ್ಲಂಘನೆಯ ಪ್ರಕರಣಗಳಲ್ಲಿ ಇತ್ಯರ್ಥವಾದ ಪ್ರಕರಣಗಳೆಷ್ಟು; ಬಾಕಿ ಉಳಿದಿರುವ ಪ್ರಕರಣಗಳೆಷ್ಟು; (ಜಿಲ್ಲಾವಾರು ವಿವರ ನೀಡುವುದು) | ರಹದಾರಿ ನಿಯಮ ಉಲ್ಲಂಘನೆಯ ಬಗ್ಗೆ ವಾಹನಗಳನ್ನು ಪ್ರವರ್ತನ ಕಾರ್ಯದ ಮೂಲಕ ತನಿಖೆ ಮಾಡಿ ಮೋಟಾರು ವಾಹನ ಕಾಯ್ದೆ ಕಲಂ 200 ಮತ್ತು 86 ರ ಅಡಿಯಲ್ಲಿ ಕ್ರಮ ಜರುಗಿಸಲಾಗುತ್ತಿದೆ. ಒಂದು ವೇಳೆ ಮುಂದೆಯೂ ಸಹ ರಹದಾರಿ ನಿಯಮ ಉಲ್ಲಂಘನೆ ಮಾಡುವುದು ಕಂಡುಬಂದಲ್ಲಿ ಮುಂದೆಯೂ ಸಹ ರಹದಾರಿಗಳ ಮೇಲೆ ಕಾನೂನು ರೀತ್ಯ ಕ್ರಮ ಕೈಗೊಳ್ಳಲಾಗುವುದು.<br>3 ವರ್ಷಗಳ ಅವಧಿಯಲ್ಲಿ ರಹದಾರಿ ನಿಯಮ ಉಲ್ಲಂಘನೆ ಮಾಡಿದ ಪ್ರಕರಣಗಳ ವಿವರ ಮತ್ತು ದಂಡ ವಸೂಲಾತಿ ಈ ಕೆಳಗಿನಂತಿದೆ. |

| | 2016-17 | | 2017-18 | | 2018-19 | |
|---|---|---|---|---|---|---|
| | **No case Disposed** | **CF collected** | **No case Disposed** | **CF collected** | **No case Disposed** | **CF collected** |
| Contract Carriage | 358 | 18,26,700/- | 410 | 2,14,450/- | 601 | 39,11,550/- |
| Stage Carriage | 394 | 2,12,350/- | 86 | 2,14,850/- | 55 | 2,68,250/- |
| AITOB | 454 | 7,70,450/- | 141 | 6,11,350/- | 103 | 6,74,750/- |

2016-17 ನೇ ಸಾಲಿನಿಂದ 3 ವರ್ಷಗಳ ಅವಧಿಯಲ್ಲಿ ರಹದಾರಿ ನಿಯಮ ಉಲ್ಲಂಘಿಸಿರುವ 48 ಪ್ರಕರಣಗಳಲ್ಲಿ ರಹದಾರಿ ಅಮಾನತ್ತುಗೊಳಿಸಲಾಗಿದೆ ಹಾಗೂ 59 ವಾಹನಗಳ ರಹದಾರಿ ರದ್ದು ಪಡಿಸಲಾಗಿದೆ.

----2

| | | |
|---|---|---|
| ಈ) | ಈ ತರಹದ ಕಾನೂನು ಉಲ್ಲಂಘನೆಯ ಪ್ರಕರಣಗಳ ಮೇಲೆ ಸರ್ಕಾರ ಯಾವ ಕ್ರಮಗಳನ್ನು ತೆಗೆದುಕೊಳ್ಳಲಾಗಿದೆ? | ಕಾನೂನು ನಿಯಮಗಳನ್ನು ಉಲ್ಲಂಘಿಸಿ ಸಂಚರಿಸುತ್ತಿರುವ ವಾಹನಗಳನ್ನು ಕಾಲಕಾಲಕ್ಕೆ ತನಿಖೆಗೆ ಒಳಪಡಿಸುವ ಪ್ರವರ್ತನ ಕಾರ್ಯವು ನಿರಂತರವಾಗಿ ಜಾರಿಯಲ್ಲಿದೆ. ಒಪ್ಪಂದ ವಾಹನ ಮತ್ತು ಅಖಿಲ ಭಾರತ ಪ್ರವಾಸಿ ವಾಹನಗಳ ತಪಾಸಣೆ ಮಾಡಿ ತನಿಖಾ ವರದಿಗಳನ್ನು ನೀಡಿರುವ ವಾಹನಗಳ ರಹದಾರಿಗಳ ಮೇಲೆ ಇಲಾಖೆಯಿಂದ ಕಾನೂನಿನ ರೀತ್ಯ ರಹದಾರಿಗಳನ್ನು ಅಮಾನತ್ತುಗೊಳಿಸುವ, ರಾಜಿ ದಂಡ ವಿಧಿಸುವಂತಹ ಕ್ರಮವನ್ನು ಕಾಲಕಾಲಕ್ಕೆ ತೆಗೆದುಕೊಳ್ಳಲಾಗುತ್ತಿದೆ. ವಾಹನಗಳ ತನಿಖಾ ಕಾರ್ಯವು ನಿರಂತರವಾಗಿ ಚಾಲ್ತಿಯಲ್ಲಿರುತ್ತದೆ. |

ಟಿಡಿ 26 ಟಿಡಿಕ್ಯೂ 2019

(ಲಕ್ಷ್ಮಣ್ ಸಂಗಪ್ಪ ಸವದಿ)
ಉಪ ಮುಖ್ಯಮಂತ್ರಿ ಹಾಗೂ ಸಾರಿಗೆ ಸಚಿವರು.